# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1293

ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 24-12-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೃಷಿ ಭಾಗ್ಯ ಯೋಜನೆಯಡಿ ಕೃಷಿ ಇಲಾಖೆಯಿಂದ ನಿರ್ಮಿಸಿರುವ ಕೃಷಿ ಹೊಂಡಗಳೆಷ್ಟು: | ರಾಜ್ಯದಲ್ಲಿ ಕೃಷಿ ಭಾಗ್ಯ ಯೋಜನೆಯಡಿ ಕೃಷಿ ಇಲಾಖೆಯಿಂದ 2014-15ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಒಟ್ಟು 2,89,827 ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದೆ |
| ಆ) | ಕೃಷಿ ಹೊಂಡಗಳಲ್ಲಿ ಪ್ರಾಣ ಹಾನಿ ತಪ್ಪಿಸಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ: | ಕೃಷಿ ಹೊಂಡಗಳಲ್ಲಿ ಪ್ರಾಣಹಾನಿ ತಪ್ಪಿಸಲು ಸರ್ಕಾರವು ಮುಂಜಾಗ್ರತ ಕ್ರಮವಾಗಿ ಕ್ಷೇತ್ರ ಮಟ್ಟದಲ್ಲಿ ರೈತರಿಗೆ ತಿಳುವಳಿಕೆ ನೀಡಿ ಕೃಷಿ ಹೊಂಡದ ಸುತ್ತಲೂ Supporting stone with GI wire fencing ಹಾಗೂ ನೆರಳು ಪರದೆ ಘಟಕ ಅಳವಡಿಸಲು ಮಾರ್ಗಸೂಚಿ ಹೊರಡಿಸಲಾಗಿದೆ. ಇದಲ್ಲದೆ, ಸುರಕ್ಷಿತ ಕ್ರಮವಾಗಿ ಕೃಷಿಹೊಂಡದ ಹತ್ತಿರ ಸೂಚನಾ ಫಲಕವನ್ನು ಹಾಗೂ ಹೊಂಡಗಳಲ್ಲಿ ಹಗ್ಗದೊಂದಿಗೆ ಟೈಯರ್, ಟ್ಯೂಬ್ ನ್ನು ಇಳಿ ಬಿಡಲು ಸಹ ತಿಳಿಸಲಾಗಿದೆ. ಈ ಕುರಿತು ಎಲ್ಲಾ ರೈತರಿಗೆ ತರಬೇತಿ, ಅರಿವು ಮೂಡಿಸುವ ಕಾರ್ಯಕ್ರಮ, ಕೃಷಿ ಅಭಿಯಾನ ಇತ್ಯಾದಿಗಳ ಮುಖಾಂತರ ಕ್ಷೇತ್ರ ಮಟ್ಟದಲ್ಲಿ ತಿಳಿವಳಿಕೆ / ತರಬೇತಿ ನೀಡಿ ಜಾಗೃತಿ ಮೂಡಿಸಲಾಗಿರುತ್ತದೆ. |
| ಇ) | ಸುರಕ್ಷತಾ ಕ್ರಮಗಳನ್ನು ಕೈಗೊಳ್ಳಲು ನಿಗಧಿಪಡಿಸಿರುವ ಸಹಾಯಧನ ಎಷ್ಟು: ಈ ಸೌಲಭ್ಯವನ್ನು ಎಷ್ಟು ಜನ ರೈತರು ಸದುಪಯೋಗ ಪಡಿಸಿಕೊಂಡಿದ್ದಾರೆ: (ತಾಲ್ಲೂಕುವಾರು ಮಾಹಿತಿ ನೀಡುವುದು) | ಸುರಕ್ಷತಾ ಕ್ರಮಗಳನ್ನು ಕೈಗೊಳ್ಳಲು ವಿವಿಧ ಅಳತೆಯ ಕೃಷಿ ಹೊಂಡಗಳಿಗೆ ಅಂದಾಜು ಪ್ರತಿ ಹೊಂಡಕ್ಕೆ ರೂ.12,220 ರಿಂದ ರೂ.32,927/- ವೆಚ್ಚವಾಗುತ್ತಿದ್ದು, ಇದರಲ್ಲಿ ಎಲ್ಲಾ ವರ್ಗದ ರೈತರಿಗೆ ಶೇ.50ರಂತೆ ಸಹಾಯಧನ ನಿಗಧಿಪಡಿಸಲಾಗಿದೆ. ಈ ಸೌಲಭ್ಯವನ್ನು ಇಲಾಖೆಯಿಂದ ಪಡೆದ ಫಲಾನುಭವಿಗಳ ತಾಲ್ಲೂಕುವಾರು ಮಾಹಿತಿಯನ್ನುಅನುಬಂಧ – 1 ರಲ್ಲಿ C.D ರೂಪದಲ್ಲಿ ಒದಗಿಸಿದೆ. |

| | | |
|---|---|---|
| ಈ) | ಕೃಷಿ ಭಾಗ್ಯ ಯೋಜನೆಯ ಮಾರ್ಗಸೂಚಿಗಳಾವುವು? (ವಿವರಗಳನ್ನು ನೀಡುವುದು) | ಕೃಷಿ ಭಾಗ್ಯ ಯೋಜನೆಯ ಮಾರ್ಗಸೂಚಿಗಳನ್ನು ಅನುಬಂಧ-1 ರಲ್ಲಿ C.D ರೂಪದಲ್ಲಿ ಒದಗಿಸಿದೆ. |

ಸಂಖ್ಯೆ:AGRI-AML/264/2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು